ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ನಿವೃತ್ತ ನೌಕರರಿಗೆ ಪಿಂಚಣಿ ಸೌಲಭ್ಯ ವಿಳಂಬವಾಗುತ್ತಿರುವ ಬಗ್ಗೆ

ಶ್ರೀ ಮಾನೆ ಶ್ರೀನಿವಾಸ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

41 (328) ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) 2017-18ನೇ ಸಾಲಿನಲ್ಲಿ ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣದಲ್ಲಿ ನಿವೃತ್ತರಾಗಿರುವ ನೌಕರರ ಸಂಖ್ಯೆ ಎಷ್ಟು ; (ಹುದ್ದೆವಾರು ವಿವರ ನೀಡುವುದು)

(ಆ) ನಿವೃತ್ತ ನೌಕರರಿಗೆ ಇಂತಿಷ್ಟೇ ತಿಂಗಳಲ್ಲಿ ಪಿಂಚಣಿ ಸೌಲಭ್ಯ ನೀಡಬೇಕೆಂದು ಸರ್ಕಾರದಿಂದ ಸ್ಪಷ್ಟ ಆದೇಶವೇನಾದರೂ ಇದೆಯೇ ; (ಇದ್ದಲ್ಲಿ ಪ್ರತಿ ಒದಗಿಸುವುದು) ನಿವೃತ್ತ ನೌಕರರಿಗೆ ಇಲ್ಲಿಯವರೆಗೂ ಸರ್ಕಾರದಿಂದ ಲಭಿಸುವ ಸೌಲಭ್ಯ ಕೆ.ಜಿ.ಐ.ಡಿ., ಜಿ.ಪಿ.ಎಫ್., ಇ.ಜಿ.ಐ.ಎಸ್., ಇಂತಹವುಗಳು ದೊರೆತಿವೆಯೇ ; ಇಲ್ಲದಿದ್ದಲ್ಲಿ, ವಿಳಂಬಕ್ಕೆ ಕಾರಣವೇನು ; ಹಾಗೂ ನಿವೃತ್ತ ನೌಕರರ ಕಡತಗಳನ್ನು ಮಹಾಲೇಖಪಾಲಕರಿಗೆ ಯಾವ ದಿನಾಂಕದಂದು ಕಳುಹಿಸಲಾಗಿದೆ ; (ವಿವರ ನೀಡುವುದು)

(ಇ) ಇಲ್ಲಿಯವರೆಗೂ ಎಷ್ಟು ನಿವೃತ್ತ ನೌಕರರ ಪ್ರಕರಣಗಳಲ್ಲಿ ಪಿಂಚಣಿ ಇತ್ಯರ್ಥವಾಗಿವೆ ; ಇತ್ಯಯರ್ಥವಾಗದಿರುವ ಪ್ರಕರಣಗಳ ಸಂಖ್ಯೆ ಎಷ್ಟು ; ಆಗದೇ ಇದ್ದಲ್ಲಿ ಇಂತಹ ವಿಳಂಬಕ್ಕೆ ಹೊಣೆ ಯಾರು ; ಯಾವ ಯಾವ ಹಂತದಲ್ಲಿ ವಿಳಂಬವಾಗಿದೆ ; ಸರ್ಕಾರದ ಆದೇಶವನ್ನು ಉಲ್ಲಂಘಿಸಿದ ಅಧಿಕಾರಿಗಳ/ಸಿಬ್ಬಂದಿಗಳ ಮೇಲೆ ಇಲ್ಲಿಯವರೆಗೂ ಯಾವ ಶಿಸ್ತು ಕ್ರಮ ತೆಗೆದುಕೊಳ್ಳಲಾಗಿದೆ ; ಈ ವಿಳಂಬದಿಂದ ನಿವೃತ್ತ ನೌಕರರಿಗೆ ಯಾವ ಯಾವ ಪ್ರಕರಣಗಳಲ್ಲಿ ಪರಿಹಾರ ನೀಡಲಾಗಿದೆ ; (ವಿವರ ನೀಡುವುದು)

(ಈ) ಸಿಬ್ಬಂದಿಗಳ ಕೊರತೆಯನ್ನು ನೀಗಿಸುವಲ್ಲಿ ಅನುಕಂಪದ ಆಧಾರದ ಮೇಲೆ ಸಿಬ್ಬಂದಿಗಳನ್ನು ನೇಮಕ ಮಾಡಲಾಗಿದೆಯೇ ; ಮಾಡದಿದ್ದಲ್ಲಿ, ಈ ವಿಳಂಬಕ್ಕೆ ಹೊಣೆ ಯಾರು, ಯಾವ ಯಾವ ಹಂತದಲ್ಲಿ ವಿಳಂಬವಾಗಿದೆ ; ಯಾವಾಗ ಅನುಕಂಪ ಆಧಾರದ ನೇಮಕಾತಿ ಆದೇಶ ನೀಡಲಾಗುವುದು ?